ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೨
ಸಂಚಿಕೆ : ೦೩ ೭

(ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜುಲೈ – ಸೆಪ್ಟೆಂಬರ್ ೨೦೦೮

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



ಪರಿವಿಡಿ

೧. ಡಾ. ಅ.ನ.ಕೃ.
೨. ಸಂಪಾದಕೀಯ / ೨
೩. ಪ್ರತಿಷ್ಠಾನದ ವಾರ್ತೆ / ೩
೪. ಸರ್ವಸದಸ್ಯರ ಸಭೆ ವರದಿ / ೫
೫. ಅಭಿನಂದನೆಗಳು / ೭
೬ ಶ್ರದ್ಧಾಂಜಲಿ / ೮
೭ ಪ್ರತಿಷ್ಠಾನದ ಇತ್ತೀಚಿನ ಪ್ರಕಟಣೆಗಳು / ೮

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಜೆಳ್ಳೂರು, ನಾಗಮಂಗಲ ತಾ॥, ಮಂಡ್ಯ ಜಿಲ್ಲೆ

## ಕನ್ನಡಮೇರು – ಟಿ.ವಿ.ವಿ.


ಡಾ. ಟಿ.ವಿ.ವಿ. ಶಾಸ್ತ್ರೀ

**ಬಿ**.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ೨೦೦೧–೦೬ ತನಕ ಅಧ್ಯಕ್ಷರಾಗಿದ್ದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀಗಳ ೭೫ರ ಸಂಭ್ರಮ ಹಾಗೂ ಅಭಿನಂದನ ಸಮಾರಂಭ ದಿನಾಂಕ ೩೦/೮/೦೮ರಂದು ಮಿಥಿಕ್ ಸೊಸೈಟಿ ಸಭಾಂಗಣದಲ್ಲಿ ಅದ್ದೂರಿಯಿಂದ ನಡೆಯಿತು. ಇದೇ ಸಂದರ್ಭದಲ್ಲಿ ಅವರನ್ನು ಕುರಿತ ಕೃತಿ 'ಕನ್ನಡ ಮೇರು' ಅಭಿನಂದನ ಗ್ರಂಥ ಸಹ ಲೋಕಾರ್ಪಣೆಗೊಂಡಿತು.

ಡಾ॥ ಟಿ.ವಿ.ವಿ. ಶಾಸ್ತ್ರೀಗಳು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಮಾಡಿದ ಅನನ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ ಅವರ ವೈಶಿಷ್ಟ್ಯತೆಗಳನ್ನು ದಾಖಲಿಸುತ್ತ ಅವರಿಗೆ ನುಡಿ ನಮನಗಳನ್ನು ಅರ್ಪಿಸುತ್ತಿದ್ದೇವೆ. ಅವರು ಶತಾಯುಗಳಾಗಿ ಕನ್ನಡದ ಸೇವೆಯನ್ನು ಸತತವಾಗಿ ನಡೆಸಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಯಶಸ್ಸಿಗೆ ಭಾಜನರಾಗಲಿ ಎಂದು ಈ ಶುಭ ಸಂದರ್ಭದಲ್ಲಿ ಅವರನ್ನು ಭಕ್ತಿಪೂರ್ವಕವಾಗಿ ಅಭಿನಂದಿಸುತ್ತಿದ್ದೇವೆ.

ಕನ್ನಡ ಭಾಷೆ, ವ್ಯಾಕರಣ, ಛಂದಸ್ಸು, ಗ್ರಂಥ ಸಂಪಾದನೆ, ಸಂಶೋಧನೆ, ನಿಘಂಟು, ಸಾಹಿತ್ಯ ಚರಿತ್ರೆ ಇತ್ಯಾದಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ೭೫ಕ್ಕೂ ಹೆಚ್ಚು ಮೌಲ್ಯಾಧಾರಿತ ಗ್ರಂಥಗಳನ್ನು ರಚಿಸಿ ಅಗಣಿತ ಸಂಖ್ಯೆಯ ವಿದ್ವತ್‌ಪೂರ್ಣ ಲೇಖನಗಳಿಂದ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸುವ ಡಾ॥ ಟಿ.ವಿ.ವಿ. ಶಾಸ್ತ್ರೀಗಳು ಶೈಕ್ಷಣಿಕ, ಸಾಮಾಜಿಕ, ಸಾಹಿತ್ಯಿಕ, ಹಾಗೂ ವಿದ್ವತ್ತಿನ ಕ್ಷೇತ್ರಗಳಲ್ಲಿ ವಿಶೇಷ ಮನ್ನಣೆಗೆ ಪಾತ್ರರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಸರಕಾರದ ರಾಜ್ಯೋತ್ಸವ ಪ್ರಶಸ್ತಿ, ಐ.ಬಿ.ಎಚ್. ಶಿಕ್ಷಣ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಹಲವು ವರ್ಷ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಚರಿತ್ರೆಯ ಸಂಪಾದಕರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಮಂಡಲಿಯ ಸದಸ್ಯರಾಗಿ, ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ ಗೌರವಕ್ಕೆ ಪಾತ್ರರಾಗಿದ್ದಾರೆ. ಇಂತಹ ವಿದ್ವಾಂಸರು ಪ್ರತಿಷ್ಠಿತ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ೫ನೇ ಅಧ್ಯಕ್ಷರಾಗಿ ದಿನಾಂಕ ೫/೧೦/೨೦೦೧ ರಿಂದ ೧೫/೧೦/೦೭ ತನಕ ೬ ವರ್ಷ ಕಾಲ ಅನುಪಮ ಸೇವೆ ಸಲ್ಲಿಸಿ ಶೈಶವಾವಸ್ಥೆಯಲ್ಲಿದ್ದ ಪ್ರತಿಷ್ಠಾನವನ್ನು ಬೆಳೆಸಿ ಸದೃಢಗೊಳಿಸಿದ ಕೀರ್ತಿ ಇವರದು. ಕಟ್ಟಡ ನಿರ್ಮಾಣಕ್ಕೆ ಕೇಂದ್ರ ಸರಕಾರದ ಮಾಜಿ ಮಂತ್ರಿ ಶ್ರೀ ಅನಂತಕುಮಾರ್ ಹಾಗೂ ಕೇಂದ್ರ ಸರ್ಕಾರದ ಮಂತ್ರಿ ಶ್ರೀ ಎಂ.ವಿ. ರಾಜಶೇಖರನ್ ಅವರಿಂದ ೨೦ ಲಕ್ಷ ಹಣವನ್ನು ಕಟ್ಟಡ ನಿಧಿಗಾಗಿ ಪಡೆದು ನೆಲಮಹಡಿಯ ಮೇಲೆ ಎರಡು ಮಜಲುಗಳನ್ನು ನಿರ್ಮಿಸಲು ಕಾರಣಕರ್ತರಾಗಿದ್ದಾರೆ. ೨೦೦೪ರಲ್ಲಿ ಅದ್ದೂರಿಯಾಗಿ ಪ್ರತಿಷ್ಠಾನದ ರಜತಮಹೋತ್ಸವವನ್ನು ಆಚರಿಸಿ, ಎಂ.ವಿ.ಸಿ. ಸಭಾಂಗಣವನ್ನು ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಎನ್. ಧರ್ಮಸಿಂಗ್ ಅವರಿಂದ ಉದ್ಘಾಟನೆಯನ್ನು ಸಹ ಮಾಡಿಸಿ ಯಶಸ್ಸು ಮೆರೆದಿದ್ದಾರೆ. ಪ್ರತಿಷ್ಠಾನಕ್ಕೆ ಪ್ರತಿಷ್ಠಿತ ಸ್ಥಾನವನ್ನು ಗಳಿಸಿಕೊಟ್ಟಿರುತ್ತಾರೆ.

ಇವರು ರಚಿಸಿರುವ ಗ್ರಂಥಗಳಿಗೆ ಹಲವು ಬಹುಮಾನಗಳು ಲಭಿಸಿವೆ. ಮುಖ್ಯವಾದವು 'ಕನ್ನಡ ಛಂದೋವಿಹಾರ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, 'ಸಾಹಿತ್ಯ ಮಂಥನ' ಕೃತಿಗೆ ದೇವರಾಜ ಬಹದ್ದೂರ್ ಬಹುಮಾನ, 'ಕನ್ನಡ ಛಂದ ಸ್ವರೂಪ'ಕ್ಕೆ ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವ ಬಹುಮಾನ ಮುಂತಾದವು ಇವರ ಯಶಸ್ಸಿಗೆ ಕೀರ್ತಿಗರಿ ಮೂಡಿಸಿವೆ. ಇವರು ಇಂಗ್ಲಿಷಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ.

ಇಂತಹ ವಿದ್ವಾಂಸರು, ಭಾಷಾತಜ್ಞರು ನಮ್ಮ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದುದು ಎಲ್ಲ ಕನ್ನಡಿಗರ ಅದೃಷ್ಟವೆಂದರೆ ತಪ್ಪಾಗಲಾರದು. ಅವರಿಗೆ ಮತ್ತೊಮ್ಮೆ ಗೌರವ ನಮನಗಳನ್ನೂ ಸಲ್ಲಿಸುತ್ತಾ ಅವರ ಅನುಪಮ ಜೀವನದ ಕೆಲ ಮುಖ್ಯ ವಿವರಗಳನ್ನು ಪ್ರತಿಷ್ಠಾನದ ಈ ಪತ್ರಿಕೆಯಲ್ಲಿ ದಾಖಲಿಸುವ ಮೂಲಕ ಕೃತಜ್ಞತೆ ಅರ್ಪಿಸುತ್ತಿದ್ದೇವೆ.

## ಸಂಪಾದಕೀಯ...............

ರಾಕೆಟ್ ವೇಗದಲ್ಲಿ ಔದ್ಯೋಗಿಕ ಪ್ರಗತಿಪಥದಲ್ಲಿ ಧಾವಿಸುತ್ತಿರುವ ಭಾರತಕ್ಕೆ ಸೂಕ್ತವಾದ ಒಂದು ಶಿಕ್ಷಣ ಮಾಧ್ಯಮವನ್ನು ಸೂಚಿಸಲು ನಿಯುಕ್ತಗೊಂಡಿರುವ 'ನಾಲೆಡ್ಜ್ ಕಮಿಷನ್ ಆಫ್ ಇಂಡಿಯಾ' ಇತ್ತೀಚೆಗೆ ೨೦೦೮ರ ಮೇ ತಿಂಗಳಲ್ಲಿ ಪ್ಲಾನಿಂಗ್ ಕಮಿಷನ್ ಮೂಲಕ ಪ್ರಧಾನ ಮಂತ್ರಿಗಳಿಗೆ ಇಂಗ್ಲಿಷನ್ನೇ ಭಾರತಾದ್ಯಂತಾ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣದ ಭಾಷೆಯಾಗಿ ಅಳವಡಿಸಬೇಕೆಂದು ನೀಡಿರುವ ಸಲಹೆ ತುಂಬಾ ಗಂಭೀರ ಸ್ವರೂಪದ್ದು ಹಾಗೂ ಅಪಾಯಕಾರಿಯಾದದ್ದು. ಈ ಬಗ್ಗೆ ಎಲ್ಲಾ ರಾಜ್ಯಗಳ ಭಾಷಾತಜ್ಞರು ಕೂಲಂಕಷವಾಗಿ ವಿಮರ್ಶಿಸಿ ಇದರಿಂದ ಪ್ರಾದೇಶಿಕ ಸಂಸ್ಕೃತಿಯ ಮೇಲಾಗುವ ದುಷ್ಪರಿಣಾಮಗಳನ್ನು ಕೇಂದ್ರ ಸರಕಾರದ ಗಮನಕ್ಕೆ ಶೀಘ್ರವೇ ತಂದು ಈ ಆತಂಕಕಾರಿ ಸಲಹೆಗೆ ವಿರೋಧ ವ್ಯಕ್ತ ಪಡಿಸುವುದಲ್ಲದೆ ಮಾತೃಭಾಷೆ/ಪರಿಸರದ ಭಾಷಾ ಮಾಧ್ಯಮವೇ ಎಲ್ಲಾ ಪ್ರಾಥಮಿಕ ಶಾಲೆಗಳಿಗೆ ರಾಷ್ಟ್ರೀಯ/ಅಂತಾರಾಷ್ಟ್ರೀಯ ಭಾಷಾತಜ್ಞರು ಹಾಗೂ ಮನಶಾಸ್ತ್ರಜ್ಞರ ಒಮ್ಮತದ ಅಭಿಪ್ರಾಯಗಳನ್ನು ಕೇಂದ್ರ ಸರ್ಕಾರಕ್ಕೆ ಮನದಟ್ಟು ಮಾಡಿಕೊಡುವುದು ಅತ್ಯಗತ್ಯವಾಗಿದೆ. ಕರ್ನಾಟಕದಲ್ಲಿ ಈಗಾಗಲೇ ಸುಪ್ರಿಂ ಕೋರ್ಟಿನ ತೀರ್ಪಿನಂತೆ ಪ್ರಾಥಮಿಕ ಶಾಲೆಯ ಹಂತದಿಂದಲೇ ಇಂಗ್ಲಿಷ್ ಒಳನುಗ್ಗಲು ಹವಣಿಸುತ್ತಿದೆ. ೪೦೦ ವರ್ಷಕ್ಕೂ ಹೆಚ್ಚು ಕಾಲ ಭಾರತವನ್ನು ಶೋಷಿಸಿದ ಬ್ರಿಟಿಷರ ಭಾಷೆ ಜಾಗತೀಕರಣ, ಔದ್ಯೋಗೀಕರಣ ಹೆಸರಿನಲ್ಲಿ ಮತ್ತೆ ರಾಷ್ಟ್ರದ ಬಹುಮುಖಿ ಸಾಹಿತ್ಯದ ಹಾಗೂ ಸಾಂಸ್ಕೃತಿಕ ಔನ್ನತ್ಯ/ಹೆಗ್ಗಳಿಕೆಯನ್ನು ಕಬಳಿಸುವುದಕ್ಕೆ ಹುನ್ನಾರ ನಡೆಸುವುದಕ್ಕೆ ಯಾರೂ ಆಸ್ಪದ ಕೊಡಬಾರದು. ಗ್ರಾಮಾಂತರ ಪ್ರದೇಶಗಳ ಹಾಗೂ ಹಿಂದುಳಿದ ವರ್ಗಗಳ ಬಡಮಕ್ಕಳ ಹಿತಾಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಪ್ರತಿ ರಾಜ್ಯದಲ್ಲೂ ಸ್ವಭಾಷಾ ರಕ್ಷಾ ಸಮಿತಿಯನ್ನು ರಚಿಸಿಕೊಂಡು ಜನಾಂದೋಲನವನ್ನು ರೂಪಿಸಿ ಈ ಆತಂಕಕಾರಿ ಪರಭಾಷಾ ದಬ್ಬಾಳಿಕೆ ಹಿಂಬಾಗಿಲಿನಿಂದ ಭಾರತದ ಸಾಂಸ್ಕೃತಿಕ ಸಂಪತ್ತನ್ನು ಸೂರೆಗೊಳ್ಳ ಹೊರಟಿರುವುದನ್ನು ನಿಲ್ಲಿಸಬೇಕಾಗಿದೆ.

'ಮಕ್ಕಳ ಕಲಿಕೆಯ ಭಾಷೆ ಆಕಸ್ಮಾತ್ ಮಾತೃಭಾಷೆಯಲ್ಲಾದರೂ ಅದು ಸಹಜವಾಗಿರಬೇಕು, ವೈಜ್ಞಾನಿಕವಾಗಿರಬೇಕು. ಅದೃಷ್ಟವಶಾತ್ ಸುಸಂಬದ್ಧ ರಚನೆಯ ಭಾರತೀಯ ಭಾಷೆಗಳು ಅತ್ಯಂತ ವೈಜ್ಞಾನಿಕ ಧ್ವನ್ಯಾತ್ಮಕ. ಇಂಗ್ಲಿಷ್ ಆದರೋ ಅಸಂಬದ್ಧ ರಚನೆಯ, ಅವೈಜ್ಞಾನಿಕ ಹಾಗೂ ಧ್ವನ್ಯಾತ್ಮಕವಲ್ಲದ ಸಂದಿಗ್ಧವಾದ ಭಾಷೆ. ಆದ್ದರಿಂದಲೇ ಪ್ರಾಥಮಿಕ ಹಂತದಲ್ಲಂತೂ ಶಿಕ್ಷಣಕ್ಕೆ ಇಂಗ್ಲಿಷ್ ಸರ್ವಥಾ ಯೋಗ್ಯವಲ್ಲ. ಇಂಗ್ಲಿಷ್ ಮಾತೃಭಾಷೆ ಮಕ್ಕಳಿಗೂ ಸಹ ಇದು ಅನಿವಾರ್ಯ ಪೀಡೆ!' ಕರ್ನಾಟಕ ಗಣಕ ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಶ್ರೀ ಜಿ.ವಿ. ಶ್ರೀನಾಥಶಾಸ್ತ್ರೀಗಳ ಈ ಹೇಳಿಕೆಯಲ್ಲಿ ಸತ್ಯ ಅಡಗಿದೆ ಎಂಬುದನ್ನು ನಾವು ಅರ್ಥಮಾಡಿಕೊಂಡಾಗ 'ನಾಲೆಡ್ಜ್ ಕಮಿಷನ್ ಆಫ್ ಇಂಡಿಯಾ'ದ ಸಲಹೆ ಎಷ್ಟು ಅಪಾಯಕಾರಿ ಎಂಬುದು ಮನದಟ್ಟಾಗುತ್ತದೆ.

ಇಂಗ್ಲಿಷನ್ನು ಪ್ರಥಮ ತರಗತಿಯಿಂದ ಪ್ರಾರಂಭಿಸುವುದರಿಂದ ರಾಷ್ಟ್ರದಲ್ಲಿ ಭಾವೈಕ್ಯವಾಗಲಿ, ಭಾವಸಾಮರಸ್ಯವಾಗಲಿ ಸಾಧಿಸಲು ಸಾಧ್ಯವಿಲ್ಲ ಎಂಬುದನ್ನು ಪ್ರಾಜ್ಞರು ರಾಜಕಾರಣಿಗಳಿಗೆ ಮನವರಿಕೆ ಮಾಡಿಕೊಡಬೇಕಾಗಿದೆ. ತಮಿಳು ನಾಡು, ಆಂಧ್ರ, ಮಹಾರಾಷ್ಟ್ರಗಳಲ್ಲಿ ಅವರ ಮಾತೃಭಾಷೆ ಅಲ್ಲಿ ನೆಲೆಸಿರುವ ಜನರಿಗೆ ಅದು ಅನಿವಾರ್ಯವಾಗಿರುವ ವಾತಾವರಣ ನಿರ್ಮಾಣವಾಗಿರುವ ಹಾಗೆ ಕರ್ನಾಟಕದಲ್ಲೂ ಕನ್ನಡ ಅನಿವಾರ್ಯ ಎಂಬ ಪರಿಸ್ಥಿತಿ ಉಂಟು ಮಾಡಿದಾಗಲೇ ಬೇರೆ ಭಾಷಿಗರೂ ಕನ್ನಡದಲ್ಲಿ ವ್ಯವಹರಿಸಲು ಮುಂದಾಗುತ್ತಾರೆ. ಇಂತಹ ಕನ್ನಡ ಪರ ವಾತಾವರಣ ಸೃಷ್ಟಿಯಾದಾಗಲೇ ಕನ್ನಡದ ಸರ್ವತೋಮುಖ ಬೆಳವಣಿಗೆ ಸಾಧ್ಯ. ಕನ್ನಡ ಪದ ಕೇವಲ ಭಾಷೆಯನ್ನು ಪ್ರತಿನಿಧಿಸುವುದಿಲ್ಲ. ಇದು ಕನ್ನಡ ನಾಡಿನ ಸಂಸ್ಕೃತಿ ಹಾಗೂ ಚಾರಿತ್ರಿಕ ಭವ್ಯತೆಯನ್ನು ನಿರೂಪಿಸುತ್ತದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕರಾದ ಪ್ರೊ. ಎಂ.ವಿ.ಸೀ. ಅದರ ಈ ನುಡಿಗಳಲ್ಲಿ ಕನ್ನಡಾಭಿಮಾನ ಹರಳುಗಟ್ಟಿರುವುದನ್ನು ಗುರುತಿಸುತ್ತೇವೆ. ಇಂಗ್ಲಿಷ್‌ನಿಂದಾಗುವ ಅಪಾಯವನ್ನು ಗಮನಿಸುತ್ತೇವೆ. "...ಹಿಂದೆ ಇಂಗ್ಲಿಷಿನ ವ್ಯಾಮೋಹ ಕಲಿತವರಲ್ಲಿ ಮಾತ್ರ ಇತ್ತು. ಕೆಲವರಲ್ಲಿ ಪ್ರೌಢಿಮೆಯೂ ಇತ್ತು. ಇಂಥವರಿಂದ ಕನ್ನಡಕ್ಕೆ ಉಪಕಾರವೂ ಆಯಿತು. ಈಗ ಇಂಗ್ಲಿಷ್ ಮೀಡಿಯಂ ಸ್ಕೂಲುಗಳ ಹಾವಳಿಯಿಂದ ಇಂಗ್ಲಿಷ್ ಹುಚ್ಚು ಇದೆಯೇ ಹೊರತು ಪ್ರೌಢಿಮೆ ಗಳಿಸಿಕೊಳ್ಳುವ ಕಡೆಗೆ ಒಲವಿಲ್ಲ. ಇದು ಅಪಾಯಕಾರಿ ಪ್ರವೃತ್ತಿ" "ಕನ್ನಡವರಿಯದ ಕನ್ನಡಿಗರು! ನಾಡಿನಲ್ಲಿ ಕಾಡುಜನ! ಇಳೆಗೆಲ್ಲ ಸಾರಬೇಕು! ನಮ್ಮ ನಾಚಿಕೆಗೇಡಿನ ಇರವನ್ನು"

ಬಿ.ಎಂ.ಶ್ರೀ. ಅವರ ಈ ಮಾತು ನಿತ್ಯಸತ್ಯ "ಇಂಗ್ಲಿಷ್ ಮುಖ್ಯ ಭಾಷೆ ಎನ್ನುವುದನ್ನು ಬಿಡುವ ತನಕ ಕನ್ನಡ ಬೆಳೆಯುವುದಿಲ್ಲ..." ಇದನ್ನು ಅರಿಯಬೇಕು. ಅರಿತು ಕನ್ನಡವನ್ನು ಬೆಳೆಸಬೇಕು. ಬೆಳೆಸಲು ಅಹರ್ನಿಶಿ ಶ್ರಮಿಸಬೇಕು.

**ಎಸ್.ವಿ. ಶ್ರೀನಿವಾಸರಾವ್**
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

## ಕಾರ್ಯಕ್ರಮಗಳು

**೨೦/೦೭/೨೦೦೮ : ಬೆಳಿಗ್ಗೆ ೧೦-೩೦ ಶಾಂತಾ ಪ್ರಭುಶಂಕರ; ಚಂದ್ರಶೇಖರ ಶರ್ಮ, ವೆಂಕಟರಂಗಪ್ಪ ದತ್ತಿ ಉಪನ್ಯಾಸ ಕಾರ್ಯಕ್ರಮ:**

ಮೇಲ್ಕಂಡ ಕಾರ್ಯಕ್ರಮ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡೋಜ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. 'ತುಮಕೂರು ಜಿಲ್ಲೆ ಬೆಳ್ಳಾವಿಯ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಆರ್. ರಾಚಪ್ಪ ಅವರು 'ಶರಣ ಸಂಸ್ಕೃತಿ' ಕುರಿತು ದತ್ತಿ ಉಪನ್ಯಾಸ ನೀಡಿದರು. ಖ್ಯಾತ ಸಾಹಿತಿ ಡಾ॥ ಎಸ್. ವಿದ್ಯಾಶಂಕರ್ ಅವರು 'ಶಿವಶರಣರು' ಮತ್ತು 'ವೈಚಾರಿಕತೆ' ವಿಷಯದ ಮೇಲೆ ಉಪನ್ಯಾಸ ಮಾಡಿದರು. ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಸ್ವಾಗತ ಭಾಷಣದಲ್ಲಿ ಅತಿಥಿಗಳ ಪರಿಚಯವನ್ನು ಮಾಡಿಕೊಟ್ಟರು. ವೇದಿಕೆಯ ಮೇಲೆ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಉಪಸ್ಥಿತರಿದ್ದರು. ಡಾ॥ ನಾ. ಗೀತಾಚಾರ್ಯರ ವಂದನಾರ್ಪಣೆಯೊಡನೆ ಕಾರ್ಯಕ್ರಮ ಮುಕ್ತಾಯಗೊಂಡಿತು.

**ಎಂ.ವಿ.ಸೀ. ಸಂಶೋಧನ ಕೇಂದ್ರ-ಸಂವಾದ**

೨೦/೦೭/೦೮ ಮಧ್ಯಾಹ್ನ ೧೨-೩೦: ಸಹೃದಯ ಗೋಷ್ಠಿ ಮತ್ತು ಪಿಎಚ್.ಡಿ, ಎಂಫಿಲ್ ವಿದ್ಯಾರ್ಥಿಗಳ ಅಧ್ಯಯನ ವೇದಿಕೆ ನಡೆಸಿದ ಈ ಗೋಷ್ಠಿಗೆ ಮಾರ್ಗದರ್ಶಕರುಗಳು ಆಗಮಿಸಿ ತಿಂಗಳ ಪ್ರಗತಿಯನ್ನು ಪರಿಶೀಲಿಸಿದರು. ಡಾ॥ ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಡಾ॥ ನಾ. ಗೀತಾಚಾರ್ಯ ಮತ್ತು ಮಾರ್ಗದರ್ಶಕರುಗಳು ವಿದ್ಯಾರ್ಥಿಗಳ ವರದಿಯನ್ನು ಪರಿಶೀಲಿಸಿ ಸೂಕ್ತ ಸೂಚನೆಗಳನ್ನು ನೀಡಿದರು.

**೧೭/೦೮/೨೦೦೮ : ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮ ಸಾವಿತ್ರಮ್ಮ ದತ್ತಿ ಮತ್ತು ಅನಂತರಂಗ ದತ್ತಿ ಪ್ರಶಸ್ತಿ ಪ್ರದಾನ ಹಾಗೂ ಸನ್ಮಾನ ಸಮಾರಂಭ:**

ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರು ಇತ್ತೀಚೆಗೆ ಕರ್ನಾಟಕ ವಿಧಾನ ಪರಿಷತ್ತಿಗೆ ಸದಸ್ಯರಾಗಿ ಆಯ್ಕೆಗೊಂಡಿರುವ ಪಿ.ಇ.ಎಸ್. ಶಿಕ್ಷಣ ಸಂಸ್ಥೆಗಳ ಸ್ಥಾಪಕ ಕಾರ್ಯದರ್ಶಿಗಳಾದ ಪ್ರೊ॥ ಎಂ.ಆರ್. ದೊರೆಸ್ವಾಮಿ ಅವರನ್ನು ಸನ್ಮಾನಿಸಿ ಅವರು ಶೈಕ್ಷಣಿಕ ಕ್ಷೇತ್ರಕ್ಕೆ ನೀಡಿರುವ ಅಪಾರ ಕೊಡುಗೆಗಳನ್ನು ಪ್ರಶಂಸಿದರು. ಸನ್ಮಾನ ಸ್ವೀಕರಿಸಬೇಕಾಗಿದ್ದ ವಿಧಾನ ಸಭೆಯ ನೂತನ ಶಾಸಕರಾದ ಶ್ರೀ ಎಲ್.ಎ. ರವಿ ಸುಬ್ರಹ್ಮಣ್ಯರವರು ಅನಾರೋಗ್ಯ ನಿಮಿತ್ತ ಉಪಸ್ಥಿತರಿರಲಿಲ್ಲ.

ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮ ನಡೆಸಿಕೊಡಲು ಆಗಮಿಸಿದ್ದ ಇತಿಹಾಸತಜ್ಞ ಡಾ॥ ಎಸ್. ಶೆಟ್ಟರ್ ಅವರು ವಿಶೇಷ ಉಪನ್ಯಾಸವಾಗಿ ತಮ್ಮ ಪ್ರಶಸ್ತಿ ವಿಜೇತ ಕೃತಿ 'ಶಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ' ಬಗ್ಗೆ ಮಾತನಾಡಿ ಕನ್ನಡದ ಪ್ರಾಚೀನತೆ ಹಾಗೂ ಶ್ರೇಷ್ಠತೆಯನ್ನು ತಮಿಳು ಭಾಷೆಯೊಡನೆ




ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ಅನಂತರಂಗ ದತ್ತಿ ಮತ್ತು ಸಂಶೋಧನ ಸಾಹಿತ್ಯ ಪ್ರಶಸ್ತಿ ಹಾಗೂ ಪ್ರೊ. ಎಂ.ಆರ್. ದೊರೆಸ್ವಾಮಿ ಮತ್ತು ಶ್ರೀ ಎಲ್.ಎ. ರವಿಸುಬ್ರಹ್ಮಣ್ಯ ಅವರ ಸನ್ಮಾನ ಸಮಾರಂಭ ೧೭/೦೮/೦೮

ಹೋಲಿಸಿ ಮೌಲಿಕ ಅಂಶಗಳನ್ನು ಸಭಿಕರ ಗಮನಕ್ಕೆ ತಂದರು. ಸಾವಿತ್ರಮ್ಮ ದತ್ತಿ 'ಮಕ್ಕಳ ಪ್ರಶಸ್ತಿ' ವಿಜೇತರಾದ ಸಾಹಿತಿ ಶ್ರೀಮತಿ ಅರುಣಾನರೇಂದ್ರ ಪ್ರಶಸ್ತಿ ಸ್ವೀಕರಿಸಿ ಪ್ರತಿಷ್ಠಾನಕ್ಕೆ ಕೃತಜ್ಞತೆ ಅರ್ಪಿಸಿದರು. ಅನಂತರಂಗ ದತ್ತಿ ಪ್ರಶಸ್ತಿ ವಿಜೇತರಾದ ಡಾ॥ ಎಸ್. ಶೆಟ್ಟರು ಮತ್ತು ಶ್ರೀಮತಿ ಅರುಣಾ ನರೇಂದ್ರ ಅವರನ್ನು ಡಾ॥ ಪಿ.ವಿ. ನಾರಾಯಣ ಸನ್ಮಾನಿಸಿ ಪ್ರಶಸ್ತಿ ಪತ್ರ ಹಾಗೂ ನಗದು ಬಹುಮಾನಗಳನ್ನು ನೀಡಿದರು.



ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮ ಸಾವಿತ್ರಮ್ಮ ದತ್ತಿ ಮತ್ತು ಅನಂತರಂಗ ದತ್ತಿ ಪ್ರಶಸ್ತಿ ಪ್ರದಾನ ಹಾಗೂ ಸನ್ಮಾನ ಸಮಾರಂಭ ೧೭/೦೮/೨೦೦೮ ಪ್ರಶಸ್ತಿ ವಿಜೇತರು: ಡಾ॥ ಎಸ್. ಶೆಟ್ಟರ್ ಮತ್ತು ಶೀಮತಿ ಅರಣಾ ನರೇಂದ್ರ

ಕಾರ್ಯಕ್ರಮದ ಪ್ರಾರಂಭದಲ್ಲಿ ಪ್ರೊ॥ ನಾ. ಗೀತಾಚಾರ್ಯ ಪ್ರಾಸ್ತಾವಿಕ ಭಾಷಣ ಮಾಡಿ 'ಸಾವಿತ್ರಮ್ಮ ದತ್ತಿ' ಮತ್ತು 'ಅನಂತರಂಗ ದತ್ತಿ'ಗಳ ಹಿನ್ನೆಲೆಯನ್ನು, ಹಾಗೂ ಈ ಬಗ್ಗೆ ಈ ದತ್ತಿಯಡಿ ಪ್ರಶಸ್ತಿ ಸ್ವೀಕರಿಸಿದವರ ವಿವರಗಳನ್ನು ನೀಡಿದರು. ಶ್ರೀ ಎಸ್.ವಿ. ಶ್ರೀನಿವಾಸರಾವ್ ಸ್ವಾಗತ ಮಾಡಿ ಅತಿಥಿಗಳ ಪರಿಚಯವನ್ನು ಮಾಡಿಸಿದರು.

ಪ್ರೊ॥ ಎಂ.ಆರ್. ದೊರೆಸ್ವಾಮಿ ಪ್ರತಿಷ್ಠಾನದ ಕಾರ್ಯಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಸನ್ಮಾನಿಸಿದ್ದಕ್ಕೆ ಕೃತಜ್ಞತೆ ಅರ್ಪಿಸಿದರು. ಪ್ರತಿಷ್ಠಾನದ ಬೆಳವಣಿಗೆಗೆ ಉದಾರವಾಗಿ ಸಹಾಯ ಮಾಡುವುದಾಗಿ ಭರವಸೆಯನ್ನು ನೀಡಿದರು.

ಡಾ॥ ಪಿ.ವಿ. ನಾರಾಯಣ ಅವರು ಅಧ್ಯಕ್ಷ ಭಾಷಣ ಮಾಡಿದರು. ಪತ್ರಕರ್ತ ಶ್ರೀ ಟಿ. ನಾಗರಾಜ ಅವರು ವಂದನಾರ್ಪಣೆ ಮಾಡಿದರು.

✣ ✣

### ೩೦/೦೮/೨೦೦೮ : ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅಭಿನಂದನ ಸಮಾರಂಭ 'ಟಿ.ವಿ.ವಿ. ೭೫ ಸಂಭ್ರಮ' ಮತ್ತು 'ಕನ್ನಡ ಮೇರು' ಸಂಪುಟದ ಲೋಕಾರ್ಪಣೆ ಕಾರ್ಯಕ್ರಮ

ಪ್ರೊ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅಭಿನಂದನ ಸಮಿತಿಯು ಬಿ.ಎಂ.ಶ್ರೀ. ಸ್ಮಾರಕ ಮತ್ತು ಇತರ ಕೆಲ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಸಂಘಗಳ ಸಹಕಾರ / ಸಹಯೋಗದೊಂದಿಗೆ ಮಿಥಿಕ್ ಸೊಸೈಟಿ ಸಭಾಂಗಣದಲ್ಲಿ ಏರ್ಪಡಿಸಿದ್ದ ಈ ವಿಶೇಷ ಸಮಾರಂಭದ ಉದ್ಘಾಟನೆಯನ್ನು ಮಾಜಿ ಕೇಂದ್ರ ಮಂತ್ರಿ, ಪ್ರಸ್ತುತ ವಿಧಾನ ಪರಿಷತ್ತಿನ ಸದಸ್ಯರಾಗಿರುವ ಶ್ರೀ ಎಂ.ವಿ. ರಾಜಶೇಖರನ್ ನೆರವೇರಿಸಿದರು. ನಿಘಂಟು ತಜ್ಞ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅಧ್ಯಕ್ಷತೆ ವಹಿಸಿದ್ದರು. 'ಕನ್ನಡ ಮೇರು' – ಅಭಿನಂದನ ಸಂಪುಟದ ಲೋಕಾರ್ಪಣೆ ಯನ್ನು ಮಾಜಿ ರಾಜ್ಯಪಾಲ ಹಾಗೂ ರಾಜ್ಯಸಭಾ ಸದಸ್ಯರಾದ ನ್ಯಾಯಮೂರ್ತಿ ಡಾ॥ ಎಂ. ರಾಮಾಜೋಯಿಸ್ ನೇರವೇರಿಸಿ ಗ್ರಂಥದ ಬಗ್ಗೆ ಹಾಗೂ ಡಾ॥ ಟಿ.ವಿ.ವಿ. ಶಾಸ್ತ್ರೀಗಳ ಬಗ್ಗೆ ಪ್ರಶಂಸೆಗಳ ಸುರಿಮಳೆಯನ್ನು ಸುರಿಸಿದರು. ಹಂಪೆ ವಿ.ವಿ.ದ ವಿಶ್ರಾಂತ, ಕುಲಪತಿ ಡಾ॥ ಎಂ.ಎಂ. ಕಲಬುರ್ಗಿ ಡಾ॥ ಶಾಸ್ತ್ರೀಗಳ ಸಂಶೋಧನಾ ಸಾಮರ್ಥ್ಯವನ್ನು ಮುಕ್ತ ಕಂಠದಿಂದ ಪ್ರಶಂಸಿಸಿ ಅವರ ಜೊತೆಯಲ್ಲಿನ ಹಲವಾರು ಖಾಸಗಿ ಪ್ರಸಂಗಗಳನ್ನು ನೆನೆಪಿಸಿಕೊಂಡರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ಧ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಎಚ್.ಎಸ್. ದೊರೆಸ್ವಾಮಿ ಟಿ.ವಿ.ವಿ. ಅವರ ವಿದ್ವತ್ ಪ್ರತಿಭೆಯನ್ನು ಸ್ತುತಿಸಿದರು. ಡಾ॥ ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ ಪ್ರಾಸ್ತಾವಿಕ ಭಾಷಣ ಮಾಡಿದರು. ಅಧಿಕ ಸಂಖ್ಯೆಯಲ್ಲಿ ಆಗಮಿಸಿದ್ದ ಡಾ॥ ಟಿ.ವಿ.ವಿ. ಅವರ ಶಿಷ್ಯರು, ಅಭಿಮಾನಿಗಳು ಅವರಿಗೆ ಹೂಗುಚ್ಛ, ಉಡುಗೊರೆ ನೀಡಿ ಸನ್ಮಾನಿಸಿದರು.

✣ ✣

### ೩/೮/೨೦೦೮ : ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ (ನೋಂ) ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದೊಂದಿಗೆ 'ಕನ್ನಡದ ಅಂಗಳದಲ್ಲಿ ತಿಂಗಳ ಬೆಳಕು–೨೮' ಕಾರ್ಯಕ್ರಮ

'ಹರಿದಾಸ ಸಾಹಿತ್ಯದಲ್ಲಿ ಸಾಮಾಜಿಕ ಚಿಂತನೆ ವಿಷಯವಾಗಿ ಉಪನ್ಯಾಸ ಬಿ.ಎಂ.ಶ್ರೀ. ಕಲಾಭವನದಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ, ಎಂ.ಇ.ಐ ಕಾರ್ಖಾನೆಯ ಕಾರ್ಮಿಕ ಕಲ್ಯಾಣಾಧಿಕಾರಿ ಶ್ರೀ ಸಿ.ಎಚ್. ಮಲ್ಲಿಕಾರ್ಜುನ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಹರಿದಾಸ ಸಾಹಿತ್ಯದ ವಿದ್ವಾಂಸರುಗಳಾದ ಶ್ರೀ ಕನಕಗಿರಿ ಹುಸೇನ್ ಸಾಹೇಬರು ಮುಖ್ಯ ಭಾಷಣಕಾರರಾಗಿದ್ದರು. ಮಾಜಿ ಶಾಸಕ ಶ್ರೀ ಕೆ. ಪ್ರಭಾಕರ ರೆಡ್ಡಿ ಅವರ ಪ್ರಾಸ್ತಾವಿಕ ಭಾಷಣದೊಂದಿಗೆ ಈ ಕಾರ್ಯಕ್ರಮ ಪ್ರಾರಂಭಗೊಂಡಿತ್ತು. ನಂತರ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ॥ ಪಿ.ವಿ. ನಾರಾಯಣ ಹರಿದಾಸ ಸಾಹಿತ್ಯ ಪರಂಪರೆಯ ಬಗ್ಗೆ ವಿಸ್ತಾರವಾದ ಮಾಹಿತಿ ನೀಡಿದರು. ಈ ಕಾರ್ಯಕ್ರಮ ಸಂಪನ್ನಗೊಳ್ಳಲು ಎಂ.ಇ.ಐ ಕನ್ನಡ ಹಿತರಕ್ಷಣಾ ಸಮಿತಿ ಅಲ್ಲದೆ ಅನೇಕ ಕಾರ್ಖಾನೆಗಳ ಕನ್ನಡ ಸಂಘಗಳು ಸಹಕಾರ ನೀಡಿದ್ದವು.

✣ ✣

### ೯/೯/೨೦೦೮ : ಎಂ.ವಿ.ಸೀ. ಸಂಸ್ಮರಣೆ, ಸಿರಿಸಂಗೀತ ಮತ್ತು ಸೋಸಲೆ ಅಯ್ಯಶಾಸ್ತ್ರೀ ದತ್ತಿ ಕಾರ್ಯಕ್ರಮ ವಿವರಗಳು

ಕನ್ನಡ ಶ್ರೇಷ್ಠ ಸಾಹಿತಿ, ಸಂಘಟಕ, ವಿದ್ವಾಂಸ, ಕವಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಸ್ಥಾಪಕ ರೂವಾರಿಗಳಾದ ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತವಾಗಿ ಉಳಿದಿದ್ದಾರೆ ಎಂದು ಅವರ ೯೯ನೇ ಜನ್ಮದಿನದ ಸಂಸ್ಮರಣ ಕಾರ್ಯಕ್ರಮದಲ್ಲಿ ಹಿರಿಯ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಸಂಸ್ಮರಣ ಉಪನ್ಯಾಸವನ್ನು ನೀಡುತ್ತ ಅಭಿಪ್ರಾಯಪಟ್ಟರು.

ಇದೇ ಸಂದರ್ಭದಲ್ಲಿ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾಗಿರುವ ಪ್ರೊ. ನಾ. ಗೀತಾಚಾರ್ಯ ಅವರಿಗೆ ಈಚೆಗೆ ಬೆಂಗಳೂರಿನ ವಿಶ್ವವಿದ್ಯಾಲಯದಿಂದ "ಕನ್ನಡ ಶಾಸನಗಳ ಭಾಷೆ ಒಂದು ಅಧ್ಯಯನ" ವಿಷಯದ ಸಂಶೋಧನ



ಎಂ.ವಿ.ಸೀ. ಸಂಸ್ಮರಣೆ ಮತ್ತು ಶಾಸಕ ಶ್ರೀ ಎಲ್.ಎ. ರವಿ ಸುಬ್ರಹ್ಮಣ್ಯ ಅವರಿಗೆ ಸನ್ಮಾನ ಸಮಾರಂಭ ದಿನಾಂಕ ೯/೯/೨೦೦೮

ಪ್ರಬಂಧಕ್ಕೆ ಡಾಕ್ಟರೇಟ್ ಪದವಿ ಬಂದಿರುವುದರ ಹಿನ್ನೆಲೆಯಲ್ಲಿ ಅವರಿಗೆ ಸಂಶೋಧನ ಕೇಂದ್ರದ ವಿದ್ಯಾರ್ಥಿಗಳಿಂದ ಅಭಿನಂದನೆ ಕಾರ್ಯಕ್ರಮವೂ ನಡೆಯಿತು.

ಡಾ. ನಾ. ಗೀತಾಚಾರ್ಯ ಅವರು "ಶಾಸನಗಳ ಹಿನ್ನೆಲೆಯಲ್ಲಿ ಕನ್ನಡ ಶಾಸ್ತ್ರೀಯ ಭಾಷೆ" ಕುರಿತು ಸೋಸಲೆ ಅಯ್ಯಶಾಸ್ತ್ರೀ ದತ್ತಿ ಉಪನ್ಯಾಸವನ್ನು ನೀಡಿದರು. ಎಂ.ವಿ.ಸೀ. ಅವರ ಜನ್ಮ ಶತಮಾನೋತ್ಸವ ಬರುವ ವರ್ಷ ಬರಲಿದ್ದು ಅವರು ಪರಿಚಯಿಸಿದ ಹಸ್ತಪ್ರತಿಶಾಸ್ತ್ರ ಕ್ಷೇತ್ರದಲ್ಲಿ ಹೊಸ ಹೊಸ ಸಂಶೋಧನೆಗಳು ನಡೆಯುತ್ತಿದ್ದು ಅದು ಇಂದು 'ಹಸ್ತಪ್ರತಿ ಅಧ್ಯಯನ' ಕ್ಷೇತ್ರದಲ್ಲಿ ಅಧ್ಯಯನಗೊಳ್ಳುತ್ತಿದೆ. ಅದನ್ನು ಇನ್ನಷ್ಟು ಖಚಿತಪಡಿಸುವ ದೃಷ್ಟಿಯಿಂದ ೨೦೦೯–೧೦ನೇ ವರ್ಷವನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಘೋಷಿಸುವ ಮೂಲಕ ಎಂ.ವಿ. ಸೀತಾರಾಮಯ್ಯನವರ ಶತಮಾನೋತ್ಸವವನ್ನು ವರ್ಷಪೂರ್ತಿ ಆಚರಿಸುವ ಯೋಜನೆ ರೂಪುಗೊಳ್ಳುತ್ತಿದೆ ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಬಸವನಗುಡಿ ಶಾಸಕರಾದ ಶ್ರೀ ರವಿಸುಬ್ರಹ್ಮಣ್ಯ ಅವರನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ.ನಾರಾಯಣ ಹಾಗೂ ಗೌರವಾಧ್ಯಕ್ಷ ನಾಡೋಜ ಜಿ. ನಾರಾಯಣ ಶಾಲುಹೊದಿಸಿ ಫಲಪುಷ್ಪ ನೀಡಿ ಸನ್ಮಾನಿಸಿದರು.

## ಸಿರಿಸಂಗೀತ

ಖ್ಯಾತ ಸುಗಮ ಸಂಗೀತ ಕಲಾವಿದೆ ಶ್ರೀಮತಿ ಜಯಾ ಪಾರ್ಥಸಾರಥಿ ಮತ್ತು ತಂಡದವರಿಂದ 'ಸಿರಿಸಂಗೀತ' ಕಾರ್ಯಕ್ರಮದ ಅಂಗವಾಗಿ ಎಂ.ವಿ.ಸೀ. ಗೀತೆಗಳ ಗಾಯನ ಕಾರ್ಯಕ್ರಮವೂ ನಡೆಯಿತು. ಮೃದಂಗ ವಾದಕರಾಗಿ ಶ್ರೀ ಆರ್. ನಾಗರಾಜ್ ಅವರು ಜೊತೆ ನೀಡಿದರು.

ಪ್ರತಿಷ್ಠಾನದ ಅಧ್ಯಕ್ಷರು, ಪ್ರಸಿದ್ಧ ಸಾಹಿತಿಗಳಾದ ಡಾ॥ ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ಭಾಷಣ ಮಾಡುತ್ತಾ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ಎಲ್ಲರೂ ಸಹಕಾರ ನೀಡಬೇಕೆಂದು ಕೋರಿದರು. ವ್ಯವಸ್ಥಾಪಕ ಕಾರ್ಯದರ್ಶಿಗಳು, ಸಾಹಿತಿಗಳು ಆದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸ್ವಾಗತ ಕೋರಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆಯ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರವು ಸಂಘಟಿಸಿದ್ದ ಈ ಕಾರ್ಯಕ್ರಮವನ್ನು ಸಂಶೋಧನಾ ಕೇಂದ್ರದ ಪಿಎಚ್.ಡಿ. ಮತ್ತು ಎಂ.ಫಿಲ್ ವಿದ್ಯಾರ್ಥಿಗಳು ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ನಡೆಸಿಕೊಟ್ಟರು.

✣ ✣

೨೮/೦೯/೨೦೦೮ ಬೆಳಿಗ್ಗೆ ೧೦-೩೦ ಗಂಟೆಗೆ ಹಿರಿಯ ನಾಗರಿಕ ಸಹೃದಯ ಸಂಘದವರು ಸಾಹಿತಿ ಶ್ರೀ ಕೋಟೀಶ್ವರ ಸೂರ್ಯನಾರಾಯಣರಾವ್ ಅವರ ತೀರ್ಥರೂಪರಾದ ದಿ॥ ಕೆ.ಪಿ. ನರಸಿಂಹಯ್ಯನವರ ಸ್ಮರಣಾರ್ಥ ಸಂಕೀರ್ತನ ಮತ್ತು ಸತ್ಸಂಗ ಕಾರ್ಯಕ್ರಮ ಏರ್ಪಡಿಸಿದ್ದರು. ಮುಖ್ಯ ಅತಿಥಿಗಳಾಗಿ ಕ.ಸಾ. ಪರಿಷತ್ತಿನ ಗೌ॥ ಕೋಶಾಧಿಕಾರಿ ಶ್ರೀ ಪುಂಡಲೀಕ ಹಾಲಂಬಿ ಆಗಮಿಸಿದ್ದರು. ಬಿ.ಟಿ.ಎಂ. ಬಡಾವಣೆಯ ಶ್ರೀ ನಂಜುಂಡ ಮೂರ್ತಿ ಮತ್ತು ಶ್ರೀ ಶಿವರಾಮ ಕಾರಂತರ ತಂಡ ಸಂಕೀರ್ತನ ಕಾರ್ಯಕ್ರಮ ನಡೆಸಿಕೊಟ್ಟರು. ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆಯಾದ ಡಾ॥ ಕೆ.ಆರ್. ಸಂಧ್ಯಾರೆಡ್ಡಿಅವರು ಅಧ್ಯಕ್ಷತೆ ವಹಿಸಿದ್ದರು.

## ಸಂಶೋಧನ ಕಮ್ಮಟ

೨೫/೦೮/೨೦೦೮ ಬೆಳಿಗ್ಗೆ ೧೦-೩೦ ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್‌ನಲ್ಲಿ ಸಂಶೋಧನ ಪುಸ್ತಕಗಳ ಬಿಡುಗಡೆ ಹಾಗೂ ಸಂಶೋಧನ ಕಮ್ಮಟವನ್ನು ಕನ್ನಡ ವಿಶ್ವ ವಿದ್ಯಾಲಯ ಹಂಪಿ, ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ವಿಶ್ವವಿದ್ಯಾಲಯ ಸಹಯೋಗದಲ್ಲಿ ಈ ಕಾರ್ಯಕ್ರಮ ಏರ್ಪಡಿಸಿತ್ತು.

ಕಾರ್ಯಕ್ರಮದ ಉದ್ಘಾಟನೆ ಪ್ರೊ. ಷ. ಶೆಟ್ಟರ್, ನಿರ್ದೇಶಕರು, ಇಂದಿರಾಗಾಂಧಿ ರಾಷ್ಟ್ರೀಯ ಕಲಾಕೇಂದ್ರ ಅವರಿಂದ ನಡೆಯಿತು. ಅಧ್ಯಕ್ಷತೆಯನ್ನು ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ॥ ಎ. ಮುರಿಗೆಪ್ಪ ವಹಿಸಿದ್ದರು. ಸಂಶೋಧನಾ ಗ್ರಂಥಗಳನ್ನು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ॥ ದೇ. ಜವರೇಗೌಡ ಬಿಡುಗಡೆ ಮಾಡಿದರು. ಮುಖ್ಯ ಅತಿಥಿಗಳಾಗಿ ಪ್ರೊ॥ ಓ. ಅನಂತರಾಮಯ್ಯ ಕುಲಪತಿಗಳು, ತುಮಕೂರು ವಿಶ್ವವಿದ್ಯಾಲಯ, ಆಗಮಿಸಿದ್ದರು. ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ ಕಾರ್ಯಕ್ರಮ ನಿರ್ವಹಿಸಿದರು. ಡಾ॥ ಪಿ.ವಿ. ನಾರಾಯಣ ಶಾಸ್ತ್ರೀ ಡಾ॥ ನಾ. ಗೀತಾಚಾರ್ಯ ಮುಂತಾದವರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಸಂಶೋಧನಾ ಕಮ್ಮಟದಲ್ಲಿ ಡಾ॥ ಬಸವರಾಜ ಕಲ್ಗುಡಿ, ಪ್ರೊ. ಎಂ.ವಿ. ನಾವಡ, ಡಾ॥ ಎನ್.ಎಸ್. ತಾರಾನಾಥ್, ಡಾ॥ ಎಸ್. ಚಂದ್ರಶೇಖರ್ ಭಾಗವಹಿಸಿ ಪ್ರಬಂಧ ಮಂಡಿಸಿದರು.

## ಸರ್ವಸದಸ್ಯರ ಸಭೆಯ ನಡಾವಳಿ

೨೭/೦೯/೨೦೦೮ ರಂದು ೩೦ನೇ 'ಸರ್ವಸದಸ್ಯರ ಸಭೆ' ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

✣ ✣

ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರು ಪ್ರಾರ್ಥನೆ ಮಾಡಿದರು. ವ್ಯವಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸಭೆಗೆ ಸ್ವಾಗತ ಕೋರುತ್ತಾ ಕಾರ್ಯಸೂಚಿಯಂತೆ ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಓದಿದರು. ಸಭೆ ಸರ್ವಾನುಮತದಿಂದ ಸ್ಥಿರೀಕರಿಸಿತು.

ಗೌರವ ಕಾರ್ಯದರ್ಶಿಗಳಾದ ಡಾ॥ ನಾ. ಗೀತಾಚಾರ್ಯ ಅವರು ೨೦೦೭-೦೮ನೇ ಸಾಲಿನ ಆಡಳಿತ ವರದಿಯನ್ನು ಸಭೆಗೆ ಮಂಡಿಸುತ್ತಾ ಈ ವರ್ಷದಿಂದ ಹಿಂದಿನ ಸಭೆಯ ನಿರ್ಣಯದಂತೆ ಎಲ್ಲ ಸದಸ್ಯರಿಗೂ ಆಡಳಿತ ವರದಿ ಮತ್ತು ಲೆಕ್ಕ ಪತ್ರಗಳನ್ನು ಅಂಚೆ ಮೂಲಕ ತಿಳಿವಳಿಕೆ ಪತ್ರದೊಂದಿಗೇ ಕಳುಹಿಸುವುದರಿಂದ ಸಭೆಯಲ್ಲಿ ಓದುವ ಅಗತ್ಯವಿಲ್ಲವೆಂದೂ ಏನಾದರೂ ತಿದ್ದುಪಡಿ ಸಲಹೆ-ಸೂಚನೆಗಳಿದ್ದಲ್ಲಿ ತಿಳಿಸಬೇಕೆಂದೂ ನಿವೇದಿಸಿದರು.

ಕಾರ್ಯಸಮಿತಿ ಸದಸ್ಯರು ನೂತನ ಅಧ್ಯಕ್ಷರು ಹಾಗೂ ಕಾರ್ಯದರ್ಶಿ ಕೋಶಾಧಿಕಾರಿ ಇತರರೆಲ್ಲ ಅತ್ಯುತ್ತಮ ಕೆಲಸವನ್ನು ಮಾಡುತ್ತಿದ್ದಾರೆಂದು ಅಭಿನಂದಿಸಿದ ಡಾ॥ ನಾಗರಾಜ್ ಅವರು ವರದಿ ಸಾಕಷ್ಟು ವಿವರವಾಗಿ ಅಚ್ಚುಕಟ್ಟಾಗಿರುವುದರಿಂದ ಅನುಮೋದಿಸಬಹುದೆಂಬ ಸೂಚನೆಯನ್ನು ಎಂ.ಎಸ್.ಭಾಸ್ಕರ್ ಅನುಮೋದಿಸಿದರು. ಸಭೆ ಮೆಚ್ಚುಗೆ ಸೂಚಿಸುತ್ತಾ ವರದಿಯನ್ನು ಅನುಮೋದಿಸಿತು.

ಕೋಶಾಧಿಕಾರಿಗಳಾದ ಶ್ರೀ ಎಸ್.ಟಿ. ರಾಧಾಕೃಷ್ಣ ಅವರು ಲೆಕ್ಕಪತ್ರಗಳನ್ನೆಲ್ಲ ಸಭೆಗೆ ನೀಡಿದ್ದು ಸಭೆ ಏನಾದರೂ ವಿವರಣೆಗಳು ಬೇಕಾದಲ್ಲಿ ಕೇಳಬಹುದೆಂದು ಸೂಚಿಸಿದರು. ಸಭೆ ಕೇಳಿದ ಹೆಚ್ಚಿನ ವಿವರಗಳನ್ನು ಕೋಶಾಧಿಕಾರಿಗಳು ಮತ್ತು ಗೌರವ ಕಾರ್ಯದರ್ಶಿಗಳು ನೀಡಿದ ನಂತರ ಸಭೆ ಲೆಕ್ಕ ಪರಿಶೋಧಕರು ನೀಡಿರುವ ಜಮಾ ಖರ್ಚು, ಆಸ್ತಿ ಹೊಣೆಗಾರಿಕೆ ತಃಖ್ತೆಗಳನ್ನು ಲೆಕ್ಕಪರಿಶೋಧಕರ ವರದಿಯನ್ನು ಸರ್ವಾನುಮತದಿಂದ ಅಂಗೀಕರಿಸಿತು.

ಗೌರವ ಕಾರ್ಯದರ್ಶಿಗಳು ಸಭೆಗೆ ವಿವರಿಸಿದ ೨೦೦೭-೦೮ನೇ ಸಾಲಿನ ಅಂದಾಜು ಆಯ-ವ್ಯಯ ಪಟ್ಟಿಯನ್ನು ಕೆಲವು ತಿದ್ದುಪಡಿಗಳೊಂದಿಗೆ ಅಂಗೀಕರಿಸಿತು.

ಗೌರವ ಕಾರ್ಯದರ್ಶಿಗಳು ನಿಯಮ ೭(ಸಿ) ದಂತೆ ಪ್ರತಿವರ್ಷ ಕಾರ್ಯಸಮಿತಿಯ ಆಯ್ಕೆ ಸದಸ್ಯರಲ್ಲಿ ೧/೩ ಭಾಗದ ಸದಸ್ಯರು ಅಂದರೆ ೪ ಜನ ನಿವೃತ್ತರಾಗಲಿದ್ದು ಅವರ ಸ್ಥಾನಕ್ಕೆ ಚುನಾವಣೆ ನಡೆಯಬೇಕಾಗುತ್ತದೆ. ಅದರಂತೆ ಈ ಸಾಲಿನಲ್ಲಿ ಕಳೆದ ೩ ವರ್ಷಗಳ ಹಿಂದೆ ಆಯ್ಕೆಯಾಗಿದ್ದ ಈ ಕೆಳಕಂಡ ೪ ಜನರು ನಿವೃತ್ತರಾಗಲಿದ್ದಾರೆ. ನೂತನ ಅಧ್ಯಕ್ಷರು ನಾಮಕರಣ ಸದಸ್ಯರಾಗಿರುವುದರಿಂದ ಅವರನ್ನು ಆಯ್ಕೆ ಸದಸ್ಯರನ್ನಾಗಿ ನೇಮಿಸಬೇಕಾಗಿದೆ. ಹಿಂದಿನ ಅಧ್ಯಕ್ಷರಾಗಿದ್ದ ಪ್ರೊ॥ ಚಿ. ಶ್ರೀನಿವಾಸರಾಜು ೨೯-೧೨-೦೮ರಂದು ಹೃದಯಾಘಾತದಿಂದ ನಿಧನರಾದ ಹಿನ್ನೆಲೆಯಲ್ಲಿ ಕಾರ್ಯಸಮಿತಿಯ ೨-೧-೦೮ರಂದು ತುರ್ತು ಸಭೆ ಸೇರಿ ಡಾ॥ ಪಿ.ವಿ. ನಾರಾಯಣ ಅವರನ್ನು ಪ್ರತಿಷ್ಠಾನದ ಅಧ್ಯಕ್ಷರನ್ನಾಗಿ ನೇಮಕ ಮಾಡಿತು. ನೂತನ ಅಧ್ಯಕ್ಷರು ಅತ್ಯಂತ ಉತ್ಸಾಹದಿಂದ ಮತ್ತು ಸಮರ್ಥವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಚಿ. ಶ್ರೀನಿವಾಸರಾಜು ಅವರ

ಸ್ಥಾನದಲ್ಲಿ ಡಾ॥ ಪಿ.ವಿ. ನಾರಾಯಣ ಅವರನ್ನು ಕಾರ್ಯಸಮಿತಿ ಸದಸ್ಯರನ್ನಾಗಿ ಮತ್ತು ಅಧ್ಯಕ್ಷರನ್ನಾಗಿ ನೇಮಿಸಿರುವುದನ್ನು ಸಭೆ ಸ್ಥಿರೀಕರಿಸಬೇಕು ಎಂದೂ ಸಭೆಗೆ ವರದಿ ಮಾಡಿದರು.

೧. ಪ್ರೊ॥ ಎಲ್.ಎಸ್. ಶೇಷಗಿರಿರಾವ್
೨. ಡಾ॥ ಚಿದಾನಂದಮೂರ್ತಿ
೩. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ
೪. ಡಾ॥ ಎಂ.ಎಲ್. ಲಲಿತಮ್ಮ

ಇವರು ಪ್ರತಿಷ್ಠಾನದಲ್ಲಿ ಸಕ್ರಿಯರಾಗಿದ್ದು ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ, ಹಾಗೂ ಸಹಕರಿಸುತ್ತಿದ್ದಾರೆ ಎಂದು ತಿಳಿಸುತ್ತಾ ಡಾ॥ ಎಂ. ಚಿದಾನಂದಮೂರ್ತಿ ಅವರು ತಮ್ಮನ್ನು ಬಿಟ್ಟುಕೊಡಲು ಕೋರಿ ಪತ್ರ ಬರೆದಿದ್ದಾರೆ ಎಂದೂ ಪ್ರೊ॥ ಎಲ್.ಎಸ್. ಶೇಷಗಿರಿರಾವ್, ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರೂ ಬಿಡುಗಡೆ ಕೋರಿದ್ದಾರೆಂದೂ ತಿಳಿಸಿದರು. ಅವರ ಸೇವೆ ಸಹಕಾರ ಪ್ರತಿಷ್ಠಾನಕ್ಕೆ ಅತ್ಯಗತ್ಯವೆಂದು ಅಭಿಪ್ರಾಯಪಡುತ್ತಾ ಸಭೆಯು ಮೇಲಿನ ನಾಲ್ಕೂ ಜನ ಸದಸ್ಯರನ್ನೂ ಮುಂದುವರಿಸಬಹುದೆಂದು ಸರ್ವಾನುಮತದಿಂದ ಅಂಗೀಕರಿಸಿತು.

ಹಿಂದಿನಿಂದಲೂ ಶ್ರೀ ಎಸ್.ಆರ್.ಆರ್.ಕೆ. ಶರ್ಮಾ ಅಸೋಸಿಯೇಟ್ಸ್ ಅವರೇ ಲೆಕ್ಕ ಪರಿಶೋಧನೆ ಮಾಡುತ್ತಿದ್ದು ತೃಪ್ತಿಕರವಾಗಿದೆಯೆಂದೂ ಉಚಿತವಾಗಿ ಸೇವೆ ನೀಡುತ್ತಿದ್ದು ನಾವು ನೀಡುವ ಸಾಂಕೇತಿಕ ಶುಲ್ಕವನ್ನು ದಾನವಾಗಿ ಹಿಂತಿರುಗಿಸುತ್ತಿದ್ದಾರೆಂದೂ ಗೌರವ ಕಾರ್ಯದರ್ಶಿಗಳು ಸಭೆಗೆ ತಿಳಿಸಿದರು. ಲೆಕ್ಕಪರಿಶೋಧಕರ ಶುಲ್ಕವನ್ನು ೫,೦೦೦-೦೦ ರೂಗಳಿಗೆ ಹೆಚ್ಚಿಸುತ್ತಾ ಅವರನ್ನೇ ಮುಂದುವರಿಸಬಹುದೆಂದು ಸಭೆ ಅಂಗೀಕರಿಸಿತು.

ಪ್ರತಿಷ್ಠಾನದ ಚಟುವಟಿಕೆಗಳ ಬಗೆಗೆ ಎಲ್ಲ ಸದಸ್ಯರೂ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಕೆಳಕಂಡ ಸದಸ್ಯರ ಸಲಹೆಗಳಿಗೆ ಕಾರ್ಯದರ್ಶಿಗಳು ಮತ್ತು ಅಧ್ಯಕ್ಷರು ವಿವರಣೆ ನೀಡಿದರು.

(ಅ) ಸಭಾಂಗಣ ಅತ್ಯುತ್ತಮವಾಗಿದ್ದು ಮಧ್ಯದ ದಾರಿಗೆ ಕಾರ್ಪೆಟ್ ಹಾಕಿಸಬೇಕು. ಹಾಗೂ ಪ್ರತಿಷ್ಠಾನದ ಗ್ರಂಥಾಲಯ ಅತ್ಯಮೂಲ್ಯವಾಗಿದ್ದು ಶೀಘ್ರವಾಗಿ ಅದರ ನವೀಕರಣವಾಗಬೇಕು ಎಂದು ಡಾ॥ ಶ್ರೀನಿವಾಸ ಹಾವನೂರ್ ಸಲಹೆಗೆ:

ಸಭಾಂಗಣಕ್ಕೆ ಧ್ವನಿಗ್ರಹಣ – ವ್ಯವಸ್ಥೆಗೆ ಶಾಸಕರಾದ ರಾಮಚಂದ್ರಗೌಡ ಅವರ ಶಾಸಕರ ನಿಧಿಯಿಂದ ೨.೦೦ ಲಕ್ಷ ರೂಗಳು ಬಿಡುಗಡೆಯಾಗಿದ್ದು ಶ್ರೀ ಜ್ಯೋತೀಶ್ವರ್ ಅವರಿಗೆ ಕಾಮಗಾರಿ ವಹಿಸಲಾಗಿದೆ. ಅವರು ನಗರ ಪಾಲಿಕೆಯ ಸಂಪರ್ಕದಲ್ಲಿದ್ದು ಇಷ್ಟರಲ್ಲೇ ಕಾಮಗಾರಿ ಆರಂಭಿಸಲಿದ್ದಾರೆ. ಆಗ ಮ್ಯಾಟು ವಾಲ್ ಸೀಲ್ಸ್ ಇತ್ಯಾದಿಗಳು ಹಾಗೂ ಯು.ಪಿ.ಎಸ್. ಸೌಲಭ್ಯವೂ ಬರುತ್ತದೆ ಎಂದು ಕಾರ್ಯದರ್ಶಿಗಳು ತಿಳಿಸಿದರು.

ಗ್ರಂಥಾಲಯದ ಪರಿಷ್ಕರಕ್ಕೆ ಈಗಾಗಲೇ ಸಲಹಾ ಸಮಿತಿ ರಚಿಸಲಾಗಿದೆ. ಡಾ॥ ಶ್ರೀನಿವಾಸ ಹಾವನೂರರು ಈಗಾಗಲೇ ಪ್ರೊ॥ ಜಿ. ಅಶ್ವತ್ಥನಾರಾಯಣ ಮುಂತಾದ ತಜ್ಞರಿದ್ದಾರೆ. ನಿವೃತ್ತ ಗ್ರಂಥಾಲಯಾಧಿಕಾರಿಗಳ ನೆರವಿನಿಂದ ಡಾ॥ ಹಾವನೂರರು ಈಗಾಗಲೇ ಕಾರ್ಯಪ್ರವೃತ್ತರಾಗಿದ್ದಾರೆ. ಗೋಡೆಗಳಿಗೆ ಸೆಲ್ಫ್ ಫಿಟಿಂಗ್ ತಜ್ಞರನ್ನು ಕರೆತಂದಿದ್ದಾರೆ. ಸುಮಾರು ೨೫ ಲಕ್ಷ ರೂಗಳ ಅಂದಾಜು ವೆಚ್ಚದ ಯೋಜನೆ ರೂಪಿಸಲಾಗುತ್ತಿದ್ದು ಹಂತಹಂತವಾಗಿ ಸಹಾಯ ಬಂದಂತೆಲ್ಲಾ ಗ್ರಂಥಾಲಯವನ್ನು ಆದ್ಯತೆಯ ಮೇಲೆ ಪರಿಷ್ಕರಿಸಲಾಗುವುದು ಎಂದು ವಿವರಣೆ ನೀಡಲಾಯಿತು.

(ಆ) ಎಂ.ವಿ.ಸೀ. ಸಮಗ್ರ ಸಾಹಿತ್ಯ ಸಂಪುಟಗಳ ಪ್ರಕಟನೆ ನಿಧಾನವಾಗುತ್ತಿದ್ದು ಶತಮಾನೋತ್ಸವ ವೇಳೆಯಲ್ಲಾದರೂ ಪೂರ್ಣಗೊಳಿಸಬೇಕು ಎಂಬ ಎಂ.ಎಸ್. ಭಾಸ್ಕರ್ ಅವರ ಸಲಹೆಗೆ: ಸಂಸ್ಥಾಪಕರಾದ ಎಂ.ವಿ. ಸೀತಾರಾಮಯ್ಯನವರ ಶತಮಾನೋತ್ಸವ ಬರುವ ಸೆಪ್ಟೆಂಬರ್‌ನಿಂದ ವರ್ಷ ಪೂರ್ತಿ ಆಚರಿಸಲು ಪ್ರತಿಷ್ಠಾನ ಈಗಾಗಲೇ ಯೋಜನೆ ರೂಪಿಸಿದೆ. ಈ ಶತಮಾನೋತ್ಸವವನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಘೋಷಿಸಿ ಪ್ರತಿಷ್ಠಾನ ಪರಿಚಯಿಸುತ್ತಿರುವ ಈ ನೂತನ ಅಧ್ಯಯನ ಶಿಸ್ತನ್ನು ರಾಜ್ಯದ್ಯಂತ ಜಾಗೃತಿಗೊಳಿಸಲು ಎಲ್ಲ ಜಿಲ್ಲೆ-ವಿಶ್ವವಿದ್ಯಾಲಯಗಳಲ್ಲೂ ಕಾರ್ಯಕ್ರಮ ರೂಪಿಸಲಾಗುವುದು. ಈ ಬಗೆ ಹತ್ತು – ಹಲವು ಆಕರ ಗ್ರಂಥಗಳು ಎಂ.ವಿ.ಸೀ. ಜೀವನ ಚರಿತ್ರೆ ಹಾಗೂ ಅವರ ಸಂಸ್ಮರಣ ಸಂಪುಟಗಳನ್ನು ಮತ್ತು ಸಮಗ್ರ ಸಾಹಿತ್ಯವನ್ನು ಸುಮಾರು ೧೫ ಸಂಪುಟಗಳಲ್ಲಿ ಪ್ರಕಟಿಸಲಾಗುವುದು. ರಾಜ್ಯ-ರಾಷ್ಟ್ರಮಟ್ಟದ ವಿಚಾರಗೋಷ್ಠಿಗಳನ್ನು ನಡೆಸಲಾಗುವುದು. ಅವರ ಅಪ್ರಕಟಿತ ಕೃತಿಗಳನ್ನು ಪ್ರಕಟಿಸಲಾಗುವುದು. ಇದಕ್ಕೆಲ್ಲ ಒಂದು ಉತ್ಸವ ಸಮಿತಿಯನ್ನು ರಚಿಸುವುದಕ್ಕಾಗಿ ಸದ್ಯದಲ್ಲಿಯೇ ಸಮಾಲೋಚನ ಸಭೆಯನ್ನು ನಡೆಸಲಾಗುವುದು. ಇದಕ್ಕಾಗಿ ಕಳೆದ ವರ್ಷದಿಂದಲೇ 'ಎಂ.ವಿ.ಸೀ. ಶತಮಾನೋತ್ಸವ ನಿಧಿ'ಯನ್ನು ರೂಪಿಸಲಾಗಿದ್ದು ಎಸ್.ಆರ್.ಆರ್.ಕೆ.ಶರ್ಮ ಅವರು ಈಗಾಗಲೇ ಕೊಡುಗೆ ನೀಡಿದ್ದಾರೆ ಎಂಬ ವಿವರಣೆಯನ್ನು ನೀಡಲಾಯಿತು.

**ಅಧ್ಯಕ್ಷ ಭಾಷಣ:**

ನೂತನ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರು ಭಾಷಣ ಮಾಡುತ್ತಾ ಪ್ರತಿಷ್ಠಾನದ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿರುವ ಎಲ್ಲರಿಗೂ ಕೃತಜ್ಞತೆಗಳನ್ನರ್ಪಿಸಿದರು. ಬಿ.ಎಂ.ಶ್ರೀ. ಸಾಹಿತ್ಯದಲ್ಲಿ ಸೇರಿಲ್ಲದ ಬಿ.ಎಂ.ಶ್ರೀ.ಯವರ ಹೆಚ್ಚಿನ ಬರಹಗಳನ್ನು ಪ್ರತ್ಯೇಕ ಪುಸ್ತಕ ಮಾಡಿಕೊಟ್ಟ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರೇ ಡಿ.ಎಲ್.ಎನ್. ಲೇಖನಗಳನ್ನು ಸಂಕಲಿಸಿ ಕೊಡಲು ಒಪ್ಪಿದ್ದು ಅದನ್ನು ಪುಸ್ತಕ ಮಾಡುವ ಬಗ್ಗೆ ಆಲೋಚಿಸಲಾಗುತ್ತಿದೆಯೆಂದೂ ತಿಳಿಸಿದರು.

ಪ್ರೊ॥ ಜಿ. ಅಶ್ವತ್ಥನಾರಾಯಣ ಅವರು ಸಭೆಗೆ ವಂದನೆ ಸಲ್ಲಿಸುವ ಮೂಲಕ ಸಭೆ ಮುಕ್ತಾಯವಾಯಿತು.

✣ ✣

## ಪ್ರಶಸ್ತಿಗೆ ಆಯ್ಕೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಕೂಡ ಮಾಡುವ ಅನಂತರಂಗ ದತ್ತಿ ಸಂಶೋಧನಾ ಸಾಹಿತ್ಯ ಪ್ರಶಸ್ತಿಯು ಪ್ರೊ॥ ಎಸ್. ಷಟ್ಟರ್ ಅವರ 'ಶಂಗಂ ತಮಿಳಗಂ' ಮತ್ತು 'ಕನ್ನಡ ನಾಡು-ನುಡಿ' ಕೃತಿಗೆ ಲಭಿಸಿದ್ದು, ಸಾವಿತ್ತಮ್ಮ ದತ್ತಿ ಮಕ್ಕಳ ಸಾಹಿತ್ಯ ಪ್ರಶಸ್ತಿಯು ಅರುಣ ನರೇಂದ್ರ ಅವರ 'ಪಾಟೀಲ' ಮಕ್ಕಳ ಕವನ ಸಂಕಲನಕ್ಕೆ ಲಭಿಸಿರುವುದಾಗಿ ಪ್ರಕಟಣೆ ತಿಳಿಸಿದೆ.

ಬೆಂಗಳೂರಿನಲ್ಲಿರುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಆ.೧೨ರಂದು ನಡೆಯುವ ಸಮಾರಂಭದಲ್ಲಿ ೨೦೦೭ನೇ ಸಾಲಿನ ಈ ಪ್ರಶಸ್ತಿಗಳನ್ನು ಪ್ರಧಾನ ಮಾಡುವುದಾಗಿ ತಿಳಿಸಲಾಗಿದೆ.

ಪ್ರೊ॥ ಜಿ. ಅಶ್ವತ್ಥನಾರಾಯಣ, ಡಾ॥ ಬೈರಮಂಗಲ ರಾಮೇಗೌಡ, ಡಾ॥ ಸಂಧ್ಯಾರೆಡ್ಡಿ ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ, ಮೋಹನದಾಸ ದಾವಸ್ಕರ್, ಬೇಡರೆಡ್ಡಿ ಹಳ್ಳಿ ಪಂಪಣ್ಣ ಅವರನ್ನೊಳಗೊಂಡ ಸಮಿತಿ ಪ್ರಶಸ್ತಿಗೆ ಕೃತಿಗಳನ್ನು ಆಯ್ಕೆ ಮಾಡಿರುವುದಾಗಿ ಪ್ರಕಟಣೆಯಲ್ಲಿ ತಿಳಿಸಲಾಗಿದೆ.

**ಪ್ರೊ॥ ಎಂ.ಪಿ. ಸೀತಾರಾಮಯ್ಯ ಅವರ ಶತಮಾನೋತ್ಸವ ವರ್ಷ ೯/೯/೨೦೦೯ ರಿಂದ ೮/೯/೨೦೧೦ ಅದ್ದೂರಿಯಿಂದ ಆಚರಿಸಲು ಸಲಹೆ/ಸೂಚನೆ/ಸಹಕಾರ ಸಹೃದಯರಿಂದ ನಿರೀಕ್ಷಿಸಲಾಗುತ್ತಿದೆ.**



# ಗ್ರಂಥ ಪರಿಚಯ

### ಗ್ರಂಥದಾನ

೧. ಡಾ॥ ಯು.ಆರ್. ಅನಂತಮೂರ್ತಿ, ಬೆಂಗಳೂರು – ೧,೫೦೦ ಪುಸ್ತಕಗಳು ಮತ್ತು ಸಾಹಿತ್ಯ ಪತ್ರಿಕೆಗಳು
೨. ಪ್ರೊ॥ ಕೆ.ಎಸ್. ಮಧುಸೂಧನ, ಬೆಂಗಳೂರು – ೭೭ ಪುಸ್ತಕಗಳು
೩. ಶ್ರೀ ಬಿ.ಎನ್. ಚಂದ್ರಶೇಖರ್, ಬೆಂಗಳೂರು – ೩೫ ಪುಸ್ತಕಗಳು
೪. ಶ್ರೀಮತಿ ಕೆ. ಭಾಮ, ಮೈಸೂರು – ೧೮ ಪುಸ್ತಕಗಳು
೫. ಪ್ರೊ॥ ಎಲ್.ಎಸ್. ಶೇಷಗಿರಿರಾವ್, ಬೆಂಗಳೂರು – ೧೯ ಪುಸ್ತಕಗಳು

### ಪ್ರತಿಷ್ಠಾನಕ್ಕೆ ದಾನ

೧. ಲಕ್ಷ್ಮೀಕಾಂತ ಕಡಬ, ಬೆಂಗಳೂರು(ಕಾರ್ಯಕ್ರಮಕ್ಕೆ ಸಹಾಯಧನ)– ೫,೦೦೦–೦೦
೨. ಶ್ರೀ ಎಸ್.ಟಿ. ರಾಧಾಕೃಷ್ಣ, ಬೆಂಗಳೂರು – ೧೫೦–೦೦
೩. ಡಾ॥ ನಾ. ಗೀತಾಚಾರ್ಯ, ಬೆಂಗಳೂರು – ೧೫೦–೦೦
೪. ಶ್ರೀ ಕೆ. ಸುಧೀರ್, ಬೆಂಗಳೂರು – ೫೦೦–೦೦

### ಪುಸ್ತಕ ಪ್ರಕಟನೆಗೆ ಸಹಾಯಧನ

೧. ಶ್ರೀ ಮೋಹನದಾಸ್ ಧಾವಸ್ಕರ್, ಬೆಂಗಳೂರು, (ಡಿ.ಎಲ್. ನರಸಿಂಹಚಾರ್ ಪುಸ್ತಕ ಪ್ರಕಟನೆಗೆ) ರೂ. ೫,೦೦೧–೦೦
೨. ಕರ್ನಾಟಕ ಅನುವಾದ ಅಕಾಡೆಮಿ, ಬೆಂಗಳೂರು (ಮೂರು ಗ್ರೀಕ್ ನಾಟಕಗಳು – ಪುಸ್ತಕದ ಗೌರವಧನ) ರೂ. ೧೦,೦೦೦–೦೦

# ಅಭಿನಂದನೆಗಳು

- **ವರ್ಧಮಾನ ಪ್ರಶಸ್ತಿ :** ೨೦೦೭ನೇ ಸಾಲಿನ ವರ್ಧಮಾನ ಪ್ರಶಸ್ತಿ ಖ್ಯಾತ ಲೇಖಕ ಶ್ರೀ ಜನಾರ್ಧನ ಗುರ್ಕಾರ್ ಅವರ 'ಶೃಂಗ ಕಂಕಣ' ಕಾದಂಬರಿಗೆ, ರೇಖಾ ಕಾಖಂಡಕಿ ಅವರ 'ಬಯಲು ಭೂಮಿ' ಕಾದಂಬರಿಗೆ ಪ್ರಾಪ್ತವಾಗಿದೆ. ಪ್ರೀತಿ ಶುಭಚಂದ್ರ ಅವರ 'ಮಹಿಳಾ ಅಧ್ಯಯನದ ತಾಂತ್ರಿಕ ನೆಲೆಗಳು ಮತ್ತು ಚಳುವಳಿಗಳು' ಕೃತಿಗೆ ವರ್ಧಮಾನ ಉದಯೋನ್ಮುಖ ಪ್ರಶಸ್ತಿ ಲಭಿಸಿದೆ.
- **'ಟಯೆಸ್ಸಾರ್' ಪ್ರಶಸ್ತಿ–೨೦೦೬:** ಹಿರಿಯ ಪತ್ರಕರ್ತ ರಾಜಾಶೈಲೇಶ ಚಂದ್ರಗುಪ್ತ ಆಯ್ಕೆಗೊಂಡಿದ್ದಾರೆಂದು ಸರಕಾರದ ಪ್ರಕಟಣೆ ತಿಳಿಸುತ್ತದೆ.
- **'ಬಸವಶ್ರೀ ಪ್ರಶಸ್ತಿ'–೨೦೦೮ :** ಮುರಘಾಮಠದ ವತಿಯಿಂದ ನೀಡುವ ಈ ಪ್ರಶಸ್ತಿ ಐ.ಎ.ಎಸ್. ಅಧಿಕಾರಿ ಡಾ॥ ಕಿರಣ್ ಬೇಡಿಯವರಿಗೆ ಸಂದಿದೆ. (೧ ಲಕ್ಷ ರೂ ನಗದು ಮತ್ತು ಪ್ರಶಸ್ತಿ ಪತ್ರ.)
- **ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಶಸ್ತಿ–೨೦೦೭ :** ಶ್ರೀ ಎನ್. ರಂಗನಾಥಶರ್ಮ, ಶ್ರೀ ವಿ. ನಾಗರಾಜರಾವ್, ಶ್ರೀಮತಿ ಎಚ್.ಎಸ್. ಪಾರ್ವತಿ, ಪ್ರೊ. ಮಾಹಿರ್ ಮನ್ಸೂರ್ ಮತ್ತು ಡಾ॥ ಡಿ.ಎಸ್. ಚೌಗಲೆ ಇವರುಗಳಿಗೆ ನೀಡಲಾಗಿದೆ.
- **ಸರ್ಕಾರದ ಪ್ರಶಸ್ತಿಗಳು :** ೨೦೦೭ನೇ ಸಾಲಿಗೆ ಈ ಕೆಳಕಂಡ ಪ್ರಶಸ್ತಿಗಳನ್ನು ಸರಕಾರ ಪ್ರಕಟಿಸಿದೆ. **ಬಸವ ಪುರಸ್ಕಾರ:** ಸಿದ್ಧಗಂಗಾ ಮಠಾಧೀಶರಾದ ಡಾ॥ ಶಿವಕುಮಾರ ಸ್ವಾಮೀಜಿ, **ಟಿ. ಚೌಡಯ್ಯ ಪ್ರಶಸ್ತಿ:** ಡಾ॥ ಪುಟ್ಟರಾಜ ಗವಾಯಿ, **ವರ್ಣಶಿಲ್ಪಿ ವೆಂಟಕಪ್ಪ ಪ್ರಶಸ್ತಿ:** ಶ್ರೀ ಶಂಕರಗೌಡ ಬೆಟ್ಟದೂರ್, **ಜಕಣಾಚಾರಿ ಪ್ರಶಸ್ತಿ:** ಶ್ರೀ ಮಲ್ಲೋಜ ಭೀಮರಾವ್ ಮಾಯಾಚಾರ್ಯ, **ಡಾ॥ ಗುಬ್ಬಿವೀರಣ್ಣ ಪ್ರಶಸ್ತಿ:** ಬಳ್ಳಾರಿಯ ಸುಭದ್ರಮ್ಮ ಮನ್ಸೂರ್, **ಜಾನಪದಶ್ರೀ ಪ್ರಶಸ್ತಿ:** ಬಳ್ಳಾರಿಯ ಶ್ರೀ ಬೆಳಗಲ್ಲು ವೀರಣ್ಣ; **ಸಂತ ಶಿಶುನಾಳ ಷರೀಫ್ ಪ್ರಶಸ್ತಿ:** ಹುಬ್ಬಳ್ಳಿಯ ಕೇಶವಗುರಂ; **ಶಾಂತಲಾ ನಾಟ್ಯಪ್ರಶಸ್ತಿ:** ಬೆಂಗಳೂರಿನ ಶ್ರೀ ಟಿ.ಎಸ್. ಭಟ್, **ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ:** ವಿಜಾಪುರದ ಶಶಿಕಲಾ ವೀರಯ್ಯಸ್ವಾಮಿ; **ಕನಕಪುರಂದರ ಪ್ರಶಸ್ತಿ:** ಧಾರವಾಡದ ಪಂಡಿತ್ ಚಂದ್ರಶೇಖರ ಪುರಾಣಿಕ ಮಠ
- **ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ – ೨೦೦೭ :** ಡಾ॥ ಆರ್. ಲಕ್ಷ್ಮೀನಾರಾಯಣ ಅವರ 'ಕನ್ನಡ ವಕ್ರೋಕ್ತಿ ಜೀವಿತ' ಕೃತಿಗೆ ಸಂದಿದೆ.

*ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.*

# ಶ್ರದ್ಧಾಂಜಲಿ

- **ಶ್ರೀ ಎಂ. ವ್ಯಾಸ** (೭೭) ಕನ್ನಡ ಹಿರಿಯ ಪ್ರಸಿದ್ಧ ಕತೆಗಾರ ಎಂ. ವ್ಯಾಸ ಅವರು ದಿನಾಂಕ ೨೩/೭/೦೮ರಂದು ಕಾಸರಗೋಡಿನ ತಮ್ಮ ಸ್ವಗೃಹ 'ಕೃಪಾನಿಧಿ'ಯಲ್ಲಿ ನಿಧನರಾದರು. ಇವರು ಕಥೆ, ಕಾದಂಬರಿ, ಕವನ, ವೈಚಾರಿಕ ಲೇಖನಗಳನ್ನು ರಚಿಸಿದ್ದಾರೆ. ಅಜಂತ 'ನಾಡಪ್ರೇಮಿ' ಪತ್ರಿಕೆಗಳ ಸಂಪಾದಕರಾಗಿಯೂ ದುಡಿದಿದ್ದರು. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ೩೦೦ಕ್ಕೂ ಹೆಚ್ಚು ಲೇಖನಗಳು, ಬಿಡಿ ಕವಿತೆಗಳು ಬೆಳಕು ಕಂಡಿವೆ.

- **ಎಸ್. ಶಿವಣ್ಣ** : ಪ್ರಾಚೀನ ಹಸ್ತಪ್ರತಿಗಳ ವಿದ್ವಾಂಸರಾದ ಎಸ್. ಶಿವಣ್ಣ ಅವರು ೧/೮/೦೮ರಂದು ನಿಧನರಾದರು. ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; ಬಸವ ಸಮಿತಿ ಪ್ರಶಸ್ತಿ; ರಮಣಶ್ರೀ ಪ್ರಶಸ್ತಿ, ಎಂ.ವಿ.ಸೀ. ಪ್ರಶಸ್ತಿ ಮುಂತಾದ ಹಲವು ಪ್ರತಿಷ್ಠಿತ ಪ್ರಶಸ್ತಿಗಳು ಇವರಿಗೆ ಸಂದಿವೆ. ಜೀವಿತಕಾಲ ೧/೨/೧೯೪೦ – ೧/೮/೨೦೦೮. ಇವರು ೩೫ಕ್ಕೂ ಹೆಚ್ಚು ಮೌಲ್ಯಾಧಾರಿತ ಕೃತಿಗಳನ್ನು ರಚಿಸಿದ್ದಾರೆ.

- **ಎಚ್.ಎಸ್. ಕೃಷ್ಣಸ್ವಾಮಿ (ಎಚ್ಚೆಸ್ಕೆ)** : ಜೀವಿತಕಾಲ ೨೬/೮/೧೯೨೦ –೨೯/೮/೨೦೦೮ ಖ್ಯಾತ ಅಂಕಣಕಾರರು ಹಾಗೂ ಅರ್ಥಶಾಸ್ತ್ರ ತಜ್ಞರು ಹಾಗೂ ಶಿಕ್ಷಣವೇತ್ತರು. ಸಾಹಿತ್ಯ ಕ್ಷೇತ್ರದಲ್ಲಿ ಪ್ರಬಂಧ, ಕಾದಂಬರಿ, ಲೇಖನಗಳನ್ನು ರಚಿಸಿ ಪ್ರಸಿದ್ಧರಾಗಿದ್ದರು. ಮಾನವಿಕ ಕರ್ನಾಟಕ, 'ಬ್ಯಾಂಕಿಂಗ್ ಪ್ರಪಂಚ', ಕನ್ನಡ ವಿಶ್ವಕೋಶದ ಸಂಪಾದಕರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು. ಜನಪ್ರಿಯ ಕೃತಿಗಳು: ವಾಣಿಜ್ಯ ಶಾಸ್ತ್ರ ಪರಿಚಯ, ಬ್ಯಾಂಕಿಂಗ್ ನಿಘಂಟು ಬದುಕು ಬೆಳಕು, ಎತ್ತರದ ವ್ಯಕ್ತಿಗಳು, ಪ್ರತಿಭಾ ಸಂದರ್ಶನ ಮುಂತಾದವು.

- **ಎಚ್.ವೈ. ಶಾರದಾ ಪ್ರಸಾದ್** : (೮೪) ಖ್ಯಾತ ವೈಚಾರಿಕ ಲೇಖನಗಳ ಲೇಖಕರು. ಇಂದಿರಾಗಾಂಧಿ, ಮೊರಾರ್ಜಿ, ರಾಜೀವ್‌ಗಾಂಧಿ ಅವರಿಗೆ ಮಾಧ್ಯಮ ಸಲಹೆಗಾರರಾಗಿದ್ದರು. (ಜೀವಿತ ಕಾಲ ೧೫/೦೪/೧೯೨೪ – ೨೯/೦೮/೨೦೦೮) ನವದೆಹಲಿಯಲ್ಲಿ ನಿಧನರಾದರು.

- **ಆರ್.ವಿ. ಭಂಡಾರಿ** : ಹಿರಿಯ ಬಂಡಾಯ ಸಾಹಿತಿ, ದಿನಾಂಕ ೨೫/೧೦/೨೦೦೮ರಂದು ಮಣಿಪಾಲ ಆಸ್ಪತ್ರೆಯಲ್ಲಿ ನಿಧನರಾದರು. (ಜೀವಿತಕಾಲ ೫/೫/೧೯೩೬–೨೫/೧೦/೨೦೦೮) ಶಾಲಾಮಾಸ್ತರರಾಗಿದ್ದು ಬಂಡಾಯ ಸಾಹಿತ್ಯ ಖ್ಯಾತಿ ಗಳಿಸಿದ್ದರು ಮಕ್ಕಳ ಸಾಹಿತ್ಯ, ಜೀವನ ಚರಿತ್ರೆ, ಕವಿತೆ ಕಾದಂಬರಿ, ನಾಟಕ ಕ್ಷೇತ್ರಗಳನ್ನು ಸಂಪನ್ನಗೊಳಿಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಪುರಸ್ಕೃತರು (೨೦೦೨).

- **ಮುದೇನೂರು ಸಂಗಣ್ಣ** : ಹಿರಿಯ ಜಾನಪದ ತಜ್ಞರು, ದಾವಣಗೆರೆಯಲ್ಲಿ ೨೬/೧೦/೦೮ ರಂದು ನಿಧನರಾದರು. ಜನನ ೧೭/೦೩/೧೯೨೭ ಬಹುಭಾಷಾ ಪಂಡಿತರು, ಬಂಗಾಳಿ ಮತ್ತು ಮರಾಠಿಯಿಂದ ಹಲವು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ನಾಟಕ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು. ರಾಜ್ಯೋತ್ಸವ ಪ್ರಶಸ್ತಿ (೧೯೯೬) ನಾಡೋಜ ಪ್ರಶಸ್ತಿ (೨೦೦೬) ಲಭಿಸಿವೆ. ನಾಟಕ ಅಕಾಡೆಮಿಯು ಫೆಲೋಶಿಪ್ ನೀಡಿ ಗೌರವಿಸಿದೆ. ಹಲವಾರು ಮೌಲಿಕ ಕೃತಿಗಳನ್ನು ರಚಿಸಿ ಖ್ಯಾತನಾಮರಾಗಿದ್ದಾರೆ.

***ಮೇಲ್ಕಂಡ ಎಲ್ಲಾ ದಿವಂಗತರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗೌರವಪೂರ್ವಕವಾಗಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.***

## ಬಿ.ಎಂ.ಶ್ರೀ. ಪ್ರತಿಷ್ಠಾನದ ಈಚೀನ ಪ್ರಕಟಣೆಗಳು

| | | | |
|---|---|---|---|
| ೧. | ಇಂಗ್ಲಿಷ್ ಗೀತೆಗಳು– | ಶ್ರೀ. ಪುನರ್ಮುದ್ರಣ (ಮೂಲ ಆಂಗ್ಲ ಕವಿತೆಗಳೊಂದಿಗೆ) | ೧೦೦–೦೦ |
| ೨. | ಹೊಸಗನ್ನಡ ವ್ಯಾಕರಣ | ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ (ಪುನರ್ಮುದ್ರಣ) | ೧೦೦–೦೦ |
| ೩. | ಕನ್ನಡವೆಂಬ ಕನ್ನಡಿಯಲ್ಲಿ | ಅನುವಾದ (ಇಂಗ್ಲಿಷ್ ಕವಿತೆಗಳ ಅನುವಾದ ಸ್ಪರ್ಧೆಯ ವಿಜೇತ ಕವನಗಳು) | ೩೦–೦೦ |
| ೪. | ಶ್ರೀಸಾಹಿತ್ಯ ಮಣಿಮಾಲೆ | ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ (ಬಿ.ಎಂ.ಶ್ರೀ ಅವರ 'ಶ್ರೀ ಸಾಹಿತ್ಯ'ದಲ್ಲಿಲ್ಲದ ಅಪ್ರಕಟಿತ ಲೇಖನಗಳ ಸಂಕಲನ) | ೧೭೫–೦೦ |
| ೫. | ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು | | ೭೫–೦೦ |



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭

ಅಚ್ಚಾದ ಪುಸ್ತಕ

ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................

..........................................................

..........................................................

ಮುದ್ರಕರು : ಇಳಾ ಮುದ್ರಾ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು – ೨೬. ☎ : ೨೬೭೫೭೯೨೯
'ವಾರ್ತಾಪತ್ರ' ಪ್ರಾಯೋಜಕರು: ಇಳಾ ಮುದ್ರಾ, ಬೆಂಗಳೂರು–೨೬.